**ಕರ್ನಾಟಕ ವಿಧಾನ ಪರಿಷತ್ತು**

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : (115)26
2. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 15.07.2019
4. ಉತ್ತರಿಸುವ ಸಚಿವರು : ಮಾನ್ಯ ಸಹಕಾರ ಸಚಿವರು

****

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಮುಖ ವಾಣಿಜ್ಯ ಹಾಗೂ ಸಿರಿಧಾನ್ಯ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ಮೂಲಕ ಮಾರುಕಟ್ಟೆ ಖಾತ್ರಿ ನೀಡುವ ವ್ಯವಸ್ಥೆ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಈ ವ್ಯವಸ್ಥೆಯಿಂದ ಮಧ್ಯವರ್ತಿಗಳು ಹಾಗೂ ದಲ್ಲಾಳಿಗಳೇ ಕೃಷಿಕರಿಗಿಂತ ಹೆಚ್ಚಿನ ಲಾಭ ಪಡೆಯುತ್ತಿದ್ದು, ಇದನ್ನು ನಿಯಂತ್ರಣದಲ್ಲಿಡಲು ಸರ್ಕಾರ ಯಾವ ಯೋಜನೆಗಳನ್ನು ರೂಪಿಸಿದೆ; | • 2019–20ನೇ ಸಾಲಿನ ಆಯವ್ಯಯದಲ್ಲಿ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳು ಬೆಲೆ ಕುಸಿತವನ್ನು ತಡೆಗಟ್ಟಲು ಈ ಕೆಳಕಂಡ ಯೋಜನೆಗಳನ್ನು ಘೋಷಿಸಿದೆ.<br>• ರಾಜ್ಯದಲ್ಲಿ 12 ಅಧಿಸೂಚಿತ ಕೃಷಿ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆಯ ಸಂರಕ್ಷಣಾ ವ್ಯವಸ್ಥೆಯನ್ನು ಆವರ್ತಕ ನಿಧಿ ಮೂಲಕ ಒದಗಿಸಲು "ರೈತ ಕಣಜ" ಯೋಜನೆ ಹಾಗೂ ಈರುಳ್ಳಿ, ಆಲೂಗಡ್ಡೆ ಹಾಗೂ ಟೊಮೆಟೊ ಉತ್ಪನ್ನಗಳ ಬೆಲೆ ಕುಸಿತ ಉಂಟಾದ ಸಮಯದಲ್ಲಿ, (Price Deficiency Payment Scheme) ಬೆಲೆ ಕೊರತೆ ಪಾವತಿ ಯೋಜನೆಯನ್ನು ರೂಪಿಸಿದೆ.<br>• ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಬೆಲೆಗಳು ಕುಸಿದಾಗ ರೈತರು ಒತ್ತಡದಲ್ಲಿ ತಮ್ಮ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವುದನ್ನು ತಪ್ಪಿಸಲು ಉಚಿತವಾಗಿ ಗರಿಷ್ಠ 8 ತಿಂಗಳ ವೈಜ್ಞಾನಿಕ ಸಂಗ್ರಹಣೆ ಸೌಲಭ್ಯ, ಅಡಮಾನ ಸಾಲದ ಮೇಲೆ ಭಾಗಶ: ಬಡ್ಡಿ ಸಹಾಯಧನದ (Interest Subvention) ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. |
| ಇ | ಪ್ರತಿ ವರ್ಷ ಸುಮಾರು 26 ಸಾವಿರ ಕೋಟಿ ಮೊತ್ತದ ಕೃಷಿ ಉತ್ಪನ್ನ ಉತ್ಪಾದನೆಯಾಗುತ್ತಿದ್ದು, ರೈತರಿಂದ ಈ ಉತ್ಪನ್ನವನ್ನು ಖರೀದಿಸಿದ ವ್ಯಾಪಾರಿಗಳು ಸುಮಾರು 48 ಸಾವಿರ ಕೋಟಿ ರೂಪಾಯಿಗಳಿಗೆ ಮಾರಾಟ ಮಾಡಿರುವುದಾಗಿ ಸಮೀಕ್ಷೆಯೊಂದರಲ್ಲಿ ವರದಿಯಾಗಿದ್ದು, ಇದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; | ಇಂತಹ ಸಮೀಕ್ಷೆಯ ವರದಿ ಸರ್ಕಾರದಲ್ಲಿ ಲಭ್ಯವಿರುವುದಿಲ್ಲ. ಒಂದು ವೇಳೆ ಸರ್ಕಾರದ ಗಮನಕ್ಕೆ ಬಂದಲ್ಲಿ, ಕ್ರಮವಹಿಸಲಾಗುವುದು. |

...2

| | | |
|---|---|---|
| ಈ | ರೈತರ ನೆರವಿಗಾಗಿ ಮಾರುಕಟ್ಟೆ ಖಾತ್ರಿ ಯೋಜನೆ ಜಾರಿಗೆ ತರಲು ಸರ್ಕಾರ ಚಿಂತನೆ ನಡೆಸಿದೆಯೇ; ಇದ್ದಲ್ಲಿ, ಇದರ ರೂಪು-ರೇಷೆಗಳೇನು?(ಮಾಹಿತಿ ನೀಡುವುದು) | ಹೌದು<br>• ರಾಜ್ಯದಲ್ಲಿ 12 ಅಧಿಸೂಚಿತ ಕೃಷಿ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆಯ ಸಂರಕ್ಷಣಾ ವ್ಯವಸ್ಥೆಯನ್ನು ಆವರ್ತಕ ನಿಧಿ ಮೂಲಕ ಒದಗಿಸಲು "ರೈತ ಕಣಜ" ಯೋಜನೆಯನ್ನು ರೂಪಿಸಲು ಉದ್ದೇಶಿಸಲಾಗಿದೆ. ಈ ಯೋಜನೆಯಲ್ಲಿ ರಾಜ್ಯದಲ್ಲಿನ ಎಲ್ಲಾ ಕೃಷಿ ಮಾರುಕಟ್ಟೆಗಳಲ್ಲಿ ವರ್ಷವಿಡೀ ಒಂದು ಶಾಶ್ವತ ಸಂಗ್ರಹಣಾ ಕೇಂದ್ರವನ್ನು ಪ್ರಾರಂಭಿಸಲು 2019-20ನೇ ಸಾಲಿನಲ್ಲಿ 510 ಕೋಟಿ ರೂ.ಗಳನ್ನು ಒದಗಿಸಲಾಗಿದೆ.<br>• ಬೆಂಬಲ ಬೆಲೆ ಮಾರ್ಗಸೂಚಿಯನ್ವಯ, ಇ-ಆಡಳಿತ ತಂತ್ರಾಂಶವು ರೈತರು ನೀಡಿದ ವಿವರಗಳನ್ನು ಭೂಮಿ, ಯುಎಡಿಐ ಮತ್ತು ಬೆಳೆ ಸಮೀಕ್ಷೆ ದತ್ತಾಂಶದೊಂದಿಗೆ ಹೊಂದಾಣಿಕೆ ಮಾಡಿ ರೈತರ ನೊಂದಣಿ ಪಟ್ಟಿಯನ್ನು ಸಿದ್ದಪಡಿಸಿ, ಆಧಾರ್ ಜೋಡಣೆಯಾದವರ ಬ್ಯಾಂಕ್ ಖಾತೆಗೆ ಹಣ ಪಾವತಿಸಲಾಗುವುದು<br>• ಸಂಗ್ರಹಣೆ ವಿಲೇವಾರಿ, ಸಾಗಾಣಿಕೆಗಳ ಬಗ್ಗೆ ರೂಪುರೇಷೆಗಳನ್ನು ರೂಪಿಸಲು ಕ್ರಮವಹಿಸಲಾಗುತ್ತಿದೆ.<br>• ಈರುಳ್ಳಿ, ಆಲೂಗಡ್ಡೆ ಹಾಗೂ ಟೊಮೆಟೊ ಉತ್ಪನ್ನಗಳ ಬೆಲೆ ಕುಸಿತ ಉಂಟಾದ ಸಮಯದಲ್ಲಿ, ಸದರಿ ಉತ್ಪನ್ನಗಳಿಗೆ ರಾಜ್ಯ ಸರ್ಕಾರದಿಂದ ಪ್ರತಿ ಕ್ವಿಂಟಾಲ್‌ಗೆ ಮೂಲ ಬೆಲೆ ನಿಗದಿಪಡಿಸಿ, ಮೂಲ ಬೆಲೆಗಿಂತ ಕಡಿಮೆ ಬೆಲೆಗೆ ಮಾರಾಟವಾದಲ್ಲಿ "ಬೆಲೆ ಕೊರತೆ ಪಾವತಿ ಯೋಜನೆಯಡಿ (Price Deficiency Payment Scheme) ವ್ಯತ್ಯಾಸದ ಮೊತ್ತವನ್ನು ಪ್ರೋತ್ಸಾಹಧನವಾಗಿ ಪಾವತಿಸಲು 2019-20ನೇ ಸಾಲಿನಲ್ಲಿ 50 ಕೋಟಿ ರೂ.ಗಳನ್ನು ಒದಗಿಸಲಾಗಿದೆ. ಬೆಲೆ ಕುಸಿತವಾದಾಗ ಸದರಿ ಯೋಜನೆಯನ್ನು ಈ ಕೆಳಕಂಡ ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸಲಾಗುವುದು.<br>• ಇ-ಆಡಳಿತ ಇಲಾಖೆಯ ತಂತ್ರಾಂಶವು ರೈತರು ನೀಡಿದ ವಿವರಗಳನ್ನು ಭೂಮಿ, ಯುಎಡಿಐ ಮತ್ತು ಬೆಳೆ ಸಮೀಕ್ಷೆ ದತ್ತಾಂಶದೊಂದಿಗೆ ಹೊಂದಾಣಿಕೆ ಮಾಡಿ ರೈತರ ಪಟ್ಟಿಯನ್ನು ಸಿದ್ದಪಡಿಸಲಾಗುವುದು.<br>• ರೈತರು ಭೂಮಿ, ಯುಎಡಿಐ ಮತ್ತು ಬೆಳೆ ಸಮೀಕ್ಷೆ ದತ್ತಾಂಶದೊಂದಿಗೆ ತಾಳೆ ಮಾಡಿ ಪರಿಶೀಲಿಸಿ ನಂತರವೇ ಪ್ರೋತ್ಸಾಹಧನವನ್ನು ನೀಡಲಾಗುವುದು.<br>• ಸದರಿ ಯೋಜನೆಯಡಿ ರೈತರ ಆಧಾರ್ ವಿವರಗಳನ್ನು ಯುಎಡಿಐದೊಂದಿಗೆ ದೃಡೀಕರಿಸಲು ಮತ್ತು ಡಿಬಿಟಿ ಮೂಲಕ ಪ್ರೋತ್ಸಾಹಧನವನ್ನು ನೀಡಲಾಗುವುದು |

....3

| | | |
|---|---|---|
| | | • ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಬೆಲೆಗಳು ಕುಸಿದಾಗ ರೈತರು ಒತ್ತಡದಲ್ಲಿ ತಮ್ಮ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವುದನ್ನು ತಪ್ಪಿಸಲು ಹಾಗೂ ಸ್ಪರ್ಧಾತ್ಮಕ ದರ ದೊರೆಯುವವರೆಗೆ ಸಂಗ್ರಹಣೆ ಮಾಡಲು ಕರ್ನಾಟಕ ರಾಜ್ಯ ಉಗ್ರಾಣ ನಿಗಮದಲ್ಲಿ ಸಂಗ್ರಹಣೆ ಮಾಡಿದಲ್ಲಿ ಉಚಿತವಾಗಿ ಗರಿಷ್ಠ 8 ತಿಂಗಳ ವೈಜ್ಞಾನಿಕ ಸಂಗ್ರಹಣೆ ಸೌಲಭ್ಯ, ಅಡಮಾನ ಸಾಲದ ಮೇಲೆ ಭಾಗಶ: ಬಡ್ಡಿ ಸಹಾಯಧನ (Interest Subvention) ಹಾಗೂ ಕನಿಷ್ಠ ಸಾಗಾಣಿಕೆ ವೆಚ್ಚವನ್ನು 200 ಕೋಟಿ ರೂ.ಗಳ ವೆಚ್ಚದಲ್ಲಿ ಕಲ್ಪಿಸಲಾಗಿದೆ. |

**ಸಂಖ್ಯೆ: ಸಇ 86 ಎಂಆರ್ಇ 2019**

**(ಬಂಡೆಪ್ಪ ಖಾಶೆಂಪೂರ)**
**ಸಹಕಾರ ಸಚಿವರು.**